

# ಹೊಂಗನಸು




ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಸಂಪುಟ: ೦೩ ಸಂಚಿಕೆ: ೫ | ಆಗಸ್ಟ್ ೨೦೧೬ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 03 Issue 5 | August 2016 | Pages - 8 | A. Sub. - Rs. 20/- | Editor : Sri. B.R. Ravindranath





ಚಂದಾ ವಿವರಗಳು

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org


ಶ್ರೀ ರಂ. ಶಾ ಅವರ ಕಾದಂಬರಿ ಆಧಾರಿತ

## ಶ್ರೀ ಟಿ ಎಸ್ ರಂಗಾ ನಿರ್ದೇಶಿಸಿರುವ ರಾಷ್ಟ್ರ ಪ್ರಶಸ್ತಿ ವಿಜೇತ 'ಸಾವಿತ್ರಿ' ಚಲನ ಚಿತ್ರ ಪ್ರದರ್ಶನ

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಹಮ್ಮಿ ಕೊಂಡಿದ್ದ ಸಾಹಿತ್ಯಾಧಾರಿತ ಚಲನಚಿತ್ರಗಳ ಪ್ರದರ್ಶನ ಹಾಗೂ ಚರ್ಚೆಯ ಎರಡನೇ ಕಂತು

ಕೃತಿಚಿತ್ರ 2ರಲ್ಲಿ ಖ್ಯಾತ ನಿರ್ದೇಶಕ ಶ್ರೀ ಟಿ.ಎಸ್. ರಂಗಾ ಅವರು ನಿರ್ದೇಶಿಸಿರುವ ಡಾ. ರಂ.ಶಾ ಅವರು ರಚಿಸಿದ ಕಾದಂಬರಿ ಆಧಾರಿತ ರಾಷ್ಟ್ರ ಪ್ರಶಸ್ತಿ ಸಂಪಾದಿಸಿದ 'ಸಾವಿತ್ರಿ' ಚಲನಚಿತ್ರವನ್ನು ಪ್ರದರ್ಶಿಸಲಾಯಿತು. (ದಿನಾಂಕ 13ನೇ ಜುಲೈ ರಂದು ಡಾ. ರಂ.ಶಾ ಅವರು ಜನಿಸಿದ ದಿನ ಆಗಿರುತ್ತದೆ) ನಂತರ ನಡೆದ ಸಂವಾದದಲ್ಲಿ ಈ ಚಲನಚಿತ್ರದ ನಿರ್ದೇಶಕರಾದ ಶ್ರೀ ಟಿ.ಎಸ್. ರಂಗಾ, ಈ ಚಿತ್ರದಲ್ಲಿ ಪ್ರಮುಖ ಪಾತ್ರವಹಿಸಿದ್ದ ಶ್ರೀ ಹೆಚ್.ಜಿ. ಸೋಮಶೇಖರ ರಾವ್, ಪತ್ರಕರ್ತ ಶ್ರೀ ಎನ್. ಎಸ್. ಶ್ರೀಧರಮೂರ್ತಿ, ಶ್ರೀ ಶ್ರೀಪತಿ ಅವರುಗಳು ಭಾಗವಹಿಸಿದರು. ಮೊದಲಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ.ಪಿ.ವಿ. ನಾರಾಯಣ ಅವರು ಸ್ವಾಗತ ಕೋರಿದರು. ಪತ್ರಕರ್ತ ಶ್ರೀ ಎನ್.ಎಸ್. ಶ್ರೀಧರಮೂರ್ತಿ ಪ್ರಾಸ್ತಾವಿಕ ನುಡಿಗಳನ್ನು ಆಡಿ ಈ ಮಾಲಿಕೆಯ ಆಶಯವನ್ನು ವಿವರಿಸಿದರು. ಶ್ರೀ ಶ್ರೀಪತಿ ಅವರು ಅತಿಥಿಗಳ ಪರಿಚಯ ಮಾಡಿಕೊಟ್ಟರು. ಈ ಚಲನಚಿತ್ರದ ನಿರ್ದೇಶಕರಾದ ಶ್ರೀ ಟಿ.ಎಸ್. ರಂಗಾ ಹಾಗೂ ಶ್ರೀ ಹೆಚ್.ಜಿ. ಸೋಮಶೇಖರರಾವ್ ಅವರು 38 ವರ್ಷಗಳ ಹಿಂದೆ ಚಿತ್ರೀಕರಿಸಿದ ಈ ಚಲನಚಿತ್ರದ ಬಗ್ಗೆಯ ತಮ್ಮ ಅನುಭವಗಳನ್ನು ವಿವರಿಸಿದರು. ಗೌರವ ಕಾರ್ಯದರ್ಶಿ ರವೀಂದ್ರನಾಥ ವಂದಾನಾರ್ಪಣೆ ಮಾಡಿದರು. ಪ್ರತಿ ತಿಂಗಳ ಎರಡನೇ ಭಾನುವಾರ ಒಂದು ಚಲನಚಿತ್ರವನ್ನು ಪ್ರದರ್ಶಿಸಲಾಗುತ್ತದೆ. ಚಲನಚಿತ್ರದ ಪ್ರದರ್ಶನದ ನಂತರ ನಡೆದ ಸಂವಾದದಲ್ಲಿ ಹಲವಾರು ಸದಸ್ಯರು ಹಾಗೂ ಪ್ರೇಕ್ಷಕರು ಭಾಗವಹಿಸಿದ್ದರು.



## ಸಂಪಾದಕೀಯ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಜುಲೈ ತಿಂಗಳಿನಲ್ಲಿ ಹಲವಾರು ಕಾರ್ಯಕ್ರಮಗಳು ನಡೆದಿರುತ್ತವೆ. ಬಹು ಮುಖ್ಯವಾಗಿ ನಡೆದ ಕಾರ್ಯಕ್ರಮವೆಂದರೆ 36ನೇ ವಾರ್ಷಿಕ ಸರ್ವಸದಸ್ಯರ ಸಭೆ. ಈ ವರ್ಷ ನಡೆದ ಚುನಾವಣೆಯಲ್ಲಿ ಕಾರ್ಯಕಾರಿ ಸಮಿತಿಯ 7 ಸದಸ್ಯರು ನಿವೃತ್ತಿಗೊಂಡು ಇಬ್ಬರು ಸದಸ್ಯರು ಪುನರಾಯ್ಕೆಗೊಂಡು 5 ಹೊಸ ಸದಸ್ಯರು ಚುನಾಯಿತರಾಗಿರುತ್ತಾರೆ.

ಹಿಂದಿನ ಬಾರಿಯ ಚುನಾವಣೆಗಳಿಗೆ ಹೋಲಿಸಿದರೆ ಈ ಬಾರಿ ವಾರ್ಷಿಕ ಸರ್ವ ಸದಸ್ಯರ ಸಭೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸದಸ್ಯರು ಹಾಜರಿದ್ದರು. ಜೊತೆಗೆ ಕಾರ್ಯಕಾರಿ ಸಮಿತಿಯಲ್ಲಿ ತೆರವಾದ ಸ್ಥಾನಗಳನ್ನು ತುಂಬಲು ಹೆಚ್ಚು ಸದಸ್ಯರು ಉತ್ಸಾಹ ತೋರಿಸಿದರು.

ರಾಜ್ಯ ಮಟ್ಟದ ಹಲವಾರು ಸಂಸ್ಥೆಗಳಿಂದ ಹಿಡಿದು ಸಣ್ಣ ಸಣ್ಣ ಸಂಸ್ಥೆಗಳಲ್ಲಿಯೂ ಗುಂಪುಗಾರಿಕೆ ಹಾಗೂ ಅಧಿಕಾರ ದಾಹದ ಕಾರಣದಿಂದ ವಾತಾವರಣ ಕಲುಷಿತಗೊಳ್ಳುತ್ತಿರುವುದು ಸರ್ವೇ ಸಾಮಾನ್ಯ. ಆದರೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಇದಕ್ಕೆ ಹೊರತಾದ ವಾತಾವರಣ ಇದೆ ಎಂಬುದು ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಸಾಬೀತಾಯಿತು. ಕಾರ್ಯಕಾರಿ ಸಮಿತಿ ಸದಸ್ಯರಾಗಲು ಹೆಚ್ಚಿನ ಸಂಖ್ಯೆಯಲ್ಲಿ ಹೊಸ ಸದಸ್ಯರು ಆಸಕ್ತಿ ತೋರಿಸಿದ್ದು ಎಲ್ಲರಿಗೂ ಸಂತಸ ತಂದಿತು. ನಮ್ಮ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಹೆಚ್ಚು ಸದಸ್ಯರು ಆಸಕ್ತಿ ತೋರಿಸುತ್ತಿರುವುದು ನಮಗೆಲ್ಲ ಹೆಮ್ಮೆಯ ವಿಚಾರವೇ. ತೆರವುಗೊಂಡ ಸ್ಥಾನಗಳಿಗಿಂತ ಹೆಚ್ಚು ಅಭ್ಯರ್ಥಿಗಳು ಕಣದಲ್ಲಿದ್ದರೂ ನಂತರ ಸದಸ್ಯರೊಬ್ಬರು ಮಾಡಿಕೊಂಡ ಮನವಿ ಮೇರೆಗೆ ಕಾರ್ಯಕಾರಿ ಸಮಿತಿಯಲ್ಲಿ ದೀರ್ಘಕಾಲದಿಂದ ಸೇವೆ ಸಲ್ಲಿಸುತ್ತಿದ್ದ ಹಿರಿಯ ಸದಸ್ಯರೂ ಸೇರಿದಂತೆ ಹೆಚ್ಚಿನ ಅಭ್ಯರ್ಥಿಗಳು ಹಿಂದೆ ಸರಿದು ಎಲ್ಲ ತೆರವಾದ ಸ್ಥಾನಗಳಿಗೆ ಅವಿರೋಧ ಆಯ್ಕೆಯಾಗುವುದನ್ನು ಸಾಧ್ಯಗೊಳಿಸಿದರು. ಅವರೆಲ್ಲರಿಗೂ ನಮ್ಮ ಅಭಿನಂದನೆಗಳು.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು

### ಆಗಸ್ಟ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಕಡೆಂಗೊಡ್ಲುಶಂಕರಭಟ್ಟ | 1–8–1904 |
| ಎಂ.ಆರ್. ಶ್ರೀನಿವಾಸ ಮೂರ್ತಿ | 2–8–1893 |
| ಯಶವಂತ ಚಿತ್ತಾಲ | 3–8–1928 |
| ವಿಕೃ ಗೋಕಾಕ್ | 9–8–1909 |
| ಕೆ.ಜಿ. ಕುಂದರಗಾರ | 14–8–1895 |
| ಮಿರ್ಜಿಅಣ್ಣಾರಾಯ | 25–8–1918 |

### ಆಗಸ್ಟ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಮಧುರ ಚೆನ್ನ | 15–8–1953 |
| ಸುರಂ ಎಕ್ಕುಂಡಿ | 20–8–1995 |
| ತಸು ಶಾಮರಾಯರು | 21–8–1998 |
| ಕೆ.ಜಿ. ಕುಂದಣಗಾರ | 22–8–1965 |
| ಚನ್ನಪ್ಪ ಉತ್ತಂಗಿ | 28–8–1962 |

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಕನ್ನಡ ಕನ್ನಡವೆಂದು ಕೂಗಾಡುವವರ ನಾನೇನೆಂಬೆನಯ್ಯಾ?
ಕನ್ನಡವೆಂಬುದು ಬರಿಬೊಬ್ಬೆಯೆ?
ಕನ್ನಡವೆಂಬುದು ಬರೀ ರಶೀತಿ ವಸೂಲಿ ಪುಸ್ತಕವೇ?
ರಾಜ್ಯೋತ್ಸವಾಚರಣೆಯೇ ಕನ್ನಡದುದ್ಧಾರವೇ?
ಕನ್ನಡವೆಂಬುದು ಉದರ ಪೋಷಣೆಯ ಮಾರ್ಗವಲ್ಲವಯ್ಯಾ!
ಕನ್ನಡವೆಂಬುದು ಕ್ಯಾಬಿನೆಟ್ ದರ್ಜೆಯ ಸಚಿವ ಪದವಿಯ ಮಜವಲ್ಲವಯ್ಯಾ!
ಕನ್ನಡವೆಂಬುದು ಜನಮನ,ಐ.ಎ. ಎಸ್., ಕೆ.ಎ. ಎಸ್ ಅಧಿಕಾರಿಗಳಂತ
ರಂಗದಲ್ಲರಳುವ, ನಾಲಿಗೆಯಲ್ಲುರುಳುವ, ನಲಿಯುವ ಮಾತಾಗದಿದ್ದರೆ
ಅಲ್ಲಾರಖಾನೆಂತು ಮೆಚ್ಚುವನಯ್ಯಾ! ॥10॥

## ಸರ್ವಸದಸ್ಯರ ವಿಶೇಷ ಸಭೆ

ದಿನಾಂಕ 3ನೇ ಜುಲೈ 2016 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸರ್ವಸದಸ್ಯರ ವಿಶೇಷ ಸಭೆಯನ್ನು ನಡೆಸಲಾಯಿತು. ಈ ಸಭೆಯಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಉಪನಿಯಮಗಳಿಗೆ ಕೆಲವು ಅಗತ್ಯ ತಿದ್ದುಪಡಿಗಳನ್ನು ಸೂಚಿಸಿ ಸರ್ವಾನುಮತದಿಂದ ಅನುಮೋದಿಸಲಾಯಿತು. ಹಾಜರಿದ್ದ ಸದಸ್ಯರ ಸಂಖ್ಯೆ 60.

## ವಾರ್ಷಿಕ ಸರ್ವ ಸದಸ್ಯರ ಸಭೆ

ದಿನಾಂಕ 3ನೇ ಜುಲೈ 2016 ರಂದು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ವಾರ್ಷಿಕ ಸರ್ವ ಸದಸ್ಯರ ಸಭೆಯನ್ನು ನಡೆಸಲಾಯಿತು. ಈ ಸಭೆಯಲ್ಲಿ ಕಾರ್ಯಸೂಚಿಯ ಪ್ರಕಾರ ಎಲ್ಲಾ ಕಾರ್ಯಕಲಾಪಗಳನ್ನು ಸಾಂಗವಾಗಿ ನಡೆಸಲಾಯಿತು. ಹಾಜರಿದ್ದ ಸದಸ್ಯರ ಸಂಖ್ಯೆ 57. ಪ್ರಮುಖವಾಗಿ ಈ ವರ್ಷದ ಸರ್ವ ಸದಸ್ಯರ ಸಭೆಯಲ್ಲಿ ನಿಯಮಾನುಸಾರವಾಗಿ ಕಾರ್ಯಕಾರಿ ಸಮಿತಿ ಸದಸ್ಯರಾದ ಶ್ರೀ.ಡಿ.ನಂ.ವೆಂಕಟರಮಣಯ್ಯ, ಶ್ರೀ ಬಿ.ಆರ್. ರವೀಂದ್ರನಾಥ್, ಶ್ರೀ ಎಂ.ಎಸ್. ರಾಮಪ್ರಸಾದ್, ಡಾ. ಅನಿಲ್‌ಕುಮಾರ್, ಪ್ರೊ. ಹೆಚ್. ಶೇಷಗಿರಿರಾವ್, ಡಾ.ಆರ್. ಲಕ್ಷ್ಮಿನಾರಾಯಣ ಹಾಗೂ ಶ್ರೀ ರಾ.ನಂ ಚಂದ್ರಶೇಖರ್ ನಿವೃತ್ತಿ ಹೊಂದಿದರು. ನಿವೃತ್ತಿ ಹೊಂದಿದ ಕಾರ್ಯಕಾರಿ ಸಮಿತಿ ಸದಸ್ಯರ ಸ್ಥಾನಗಳಿಗೆ ಶ್ರೀಬಿ.ಆರ್.ರವೀಂದ್ರನಾಥ್, ಡಾ.ಅನಿಲ್‌ಕುಮಾರ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ.ಜಯಮ್ಮ ಕರಿಯಣ್ಣ, ಶ್ರೀ ಸಿ.ಕೆ ರಾಮೇಗೌಡ, ಡಾ. ನಳಿನಿ ವೆಂಕಟೇಶ್ ಹಾಗೂ ಶ್ರೀಮತಿ ಲಕ್ಷ್ಮಿ ಎನ್. ಮೂರ್ತಿ ಅವರುಗಳು 2016ರಿಂದ 2019ರ ವರೆಗಿನ ಅವಧಿಗೆ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಅವಿರೋಧವಾಗಿ ಆಯ್ಕೆಯಾದರು.

ಪತ್ರಿಕಾ ಪ್ರಕಟಣೆ

## ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ ಇಪ್ಪತ್ತೈದು ಸಾವಿರರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲೂರಾವ್ ಯುವಬರಹಗಾರ ಪ್ರಶಸ್ತಿಗಾಗಿ 35 ವರ್ಷ ವಯಸ್ಸು ಮೀರದ ಯುವ ಬರಹಗಾರರು ರಚಿಸಿದ 2015ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಲೇಖಕರು ಪ್ರಕಟಗೊಂಡ ಕೃತಿಯ ಒಂದು ಪ್ರತಿಯನ್ನು ತಮ್ಮ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, 3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–560019, ದೂರವಾಣಿ ಸಂಖ್ಯೆ : 080–26615877 ಇವರಿಗೆ ಕಳುಹಿಸಬಹುದು.
ಕೊನೆಯ ದಿನಾಂಕ : 31ನೇ ಆಗಸ್ಟ್ 2016

## ಶಾ.ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ ಇಪ್ಪತ್ತೈದು ಸಾವಿರರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ, 2015ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಬೇರಾವುದೇ ಭಾಷೆಯಿಂದ ಕನ್ನಡಕ್ಕೆ ಅಥವಾ ಕನ್ನಡದಿಂದ ಇಂಗ್ಲೀಷ್‌ಗೆ ಅನುವಾದವಾಗಿರುವ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಅನುವಾದಕರು ಪ್ರಕಟಗೊಂಡ ಕೃತಿಯ ಒಂದು ಪ್ರತಿಯನ್ನು ತಮ್ಮ ವಿವರಗಳ ಜೊತೆ ಗೌರವಕಾರ್ಯದರ್ಶಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, 3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–560019, ದೂರವಾಣಿ ಸಂಖ್ಯೆ : 080–26615877 ಇವರಿಗೆ ಕಳುಹಿಸಬಹುದು.
ಕೊನೆಯ ದಿನಾಂಕ : 31ನೇ ಆಗಸ್ಟ್ 2016

# ಆಗಸ್ಟ್ 2016 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



### ಗಮಕವಾಹಿನಿ–7

**3–8–2016 ಬುಧವಾರ ಸಂಜೆ 6 ಗಂಟೆಗೆ**

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ ಜಂಟಿ ಕಾರ್ಯಕ್ರಮ
"ಶ್ರೀಕೃಷ್ಣ ಜನನ"
ಮೈ.ಶೇ. ಅನಂತಪದ್ಮನಾಭ ರಾಯರ ಕೃತಿ
ಭಾಗವಹಿಸುವರು : ಚೈತನ್ಯ, ನಿರೀಕ್ಷಾ, ಭಾವನ, ಅದಿತಿ, ಮೇಘನಾ,ಅಖಿಲಾ



### ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ

**8–8–2016 ಸೋಮವಾರ ಸಂಜೆ 6 ಗಂಟೆಗೆ**

ಸಾಕ್ಷ್ಯಚಿತ್ರಗಳ ಪ್ರದರ್ಶನ




### ಕೃತಿ–ಚಿತ್ರ –3

**14–08–2016 ಭಾನುವಾರ ಬೆಳಿಗ್ಗೆ 10.30 ಗಂಟೆಗೆ**

ಚಲನ ಚಿತ್ರ ಪ್ರದರ್ಶನ
ಶ್ರೀ ರಾಜೇಂದ್ರಸಿಂಗ್ ಬಾಬು ನಿರ್ದೇಶಿಸಿರುವ ತ್ರಿವೇಣಿ ಅವರ ಕಾದಂಬರಿ ಆಧಾರಿತ
"ಹೂವು – ಹಣ್ಣು" ಚಲನ ಚಿತ್ರ ಪ್ರದರ್ಶನ
ಮುಖ್ಯ ಅತಿಥಿ: ಶ್ರೀ ರಾಜೇಂದ್ರಸಿಂಗ್ ಬಾಬು,
ಪ್ರಸಿದ್ಧ ನಿರ್ದೇಶಕರು, ಅಧ್ಯಕ್ಷರು ಕರ್ನಾಟಕ ಚಲನಚಿತ್ರ ಅಕಾಡೆಮಿ



### 'ಅಕ್ಕರಗೊಟ್ಟಿ'

**16–8–2016 ಮಂಗಳವಾರ ಸಂಜೆ 6 ಗಂಟೆಗೆ**

ವಿಷಯ: ಗಿರೀಶ್ ಕಾರ್ನಾಡರ ಅಗ್ನಿ ಮತ್ತು ಮಳೆ' ನಾಟಕದ ಒಂದು ಸಾಂಸ್ಕೃತಿಕ ಸಮಸ್ಯೆ:
ಚಾಲನೆ : ಡಾ॥ ಅನ್ನದಾನೇಶ್.ಬಿ.ಎ

### ದತ್ತಿ ಕಾರ್ಯಕ್ರಮ ಉಪನ್ಯಾಸ

**23–8–2016 ಮಂಗಳವಾರ ಸಂಜೆ 6 ಗಂಟೆಗೆ**

ಸುಬ್ಬಯ್ಯ ಶಾಸ್ತ್ರೀ ಹೆಗಡೆ, ಎಂ.ಕೆ. ವಿಜಯಲಕ್ಷ್ಮೀ, ಎನ್. ಅನಂತರಂಗಚಾರ್, ಅನಂತರಂಗ ಪ್ರತಿಷ್ಠಾನ ದತ್ತಿ
ಉಪನ್ಯಾಸ: "ದಾಸ ಸಾಹಿತ್ಯಕ್ಕೆ ವಾದಿರಾಜರ ಕೊಡುಗೆ"
ಉಪನ್ಯಾಸಕಾರರು :ಪ್ರೊ॥ ವಾದಿರಾಜ್, ವಿಜಯಕಾಲೇಜು, ಆರ್.ವಿ.ರೋಡ್, ಬೆಂಗಳೂರು





### ರಂಗ ಸಂವಾದ

**27ನೇ ಆಗಸ್ಟ್ 2016 ಶನಿವಾರ ಸಂಜೆ 6 ಗಂಟೆಗೆ**

ಬಿ. ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ
"ಮಾತಾಡ್ತಾನೆ ನೋಡಿ ನಮ್ಮ ಗಣೇಶ"
ನಾಟಕ ಪ್ರದರ್ಶನ

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜೂನ್ 2016– ಜುಲೈ 2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

**ಜಯಲಕ್ಷ್ಮಮ್ಮ ಬಾಪು ರಾಮಣ್ಣ ದತ್ತಿ -- ಸಂಗೀತ ಕಾರ್ಯಕ್ರಮ**
ದಿನಾಂಕ 25.06.2016 ರಂದು ಜಯಲಕ್ಷ್ಮಮ್ಮ ಬಾಪು ರಾಮಣ್ಣ ದತ್ತಿಯಡಿಯಲ್ಲಿ ಸಂಗೀತ ಕಾರ್ಯಕ್ರಮ – ಕುಮಾರಿ ಅಪೂರ್ವ ಹಾಗೂ ಸಂಗಡಿಗರು ನಡೆಸಿಕೊಟ್ಟರು

**ಗಮಕ ವಾಹಿನಿ ಕಾರ್ಯಕ್ರಮ ಮಾಲೆ – 6**



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ ಜಂಟಿಯಾಗಿ ಆಯೋಜಿಸುತ್ತಿರುವ ಗಮಕವಾಹಿನಿ ಮಾಲೆ–6ರ ಕಾರ್ಯಕ್ರಮ ದಿನಾಂಕ 07–07–2016 ರಂದು ಬಿ.ಎಂ.ಶ್ರೀ ಸಭಾಂಗಣದಲ್ಲಿ ನೆರವೇರಿತು.
ಕುಮಾರ ವ್ಯಾಸ ಭಾರತ 'ಶಿರಾತಾರ್ಜುನಿಯ' ಇಬ್ಬರು ವಿದಾರ್ಥಿಗಳು ಶ್ರೀ ಅನಿಲ್ ಭಾರದ್ವಾಜ್(ವ್ಯಾಖ್ಯಾನ) ಹಾಗೂ ಕು. ವಿಶಾಖ (ವಾಚನ)

**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ** – ಸಾಕ್ಷ್ಯ ಚಿತ್ರಗಳ ಪ್ರದರ್ಶನದಲ್ಲಿ 04–07–2016ರಂದು ಸರ್ವಜ್ಞ ಹಾಗೂ ರತ್ನಾಕರ ವರ್ಣಿ ಅವರುಗಳ ಬಗ್ಗೆ ಸಾಕ್ಷ್ಯಚಿತ್ರಗಳನ್ನು ಪ್ರದರ್ಶಿಸಲಾಯಿತು.

**ಅಕ್ಕರಗೊಟ್ಟಿ**



ದಿನಾಂಕ 13ನೇ ಜೂನ್ 2016 ರಂದು ನಡೆದ ಅಕ್ಕರಗೊಟ್ಟಿ ಕಾರ್ಯಕ್ರಮದಲ್ಲಿ, ಕನ್ನಡ ಪತ್ಯ ಬೋಧನೆ ಕೆಲವು ಪ್ರಶ್ನೆಗಳು ಎಂಬ ವಿಷಯದ ಬಗ್ಗೆ ಪ್ರೊ|| ಹೆಚ್.ಎನ್. ಮುರಳೀಧರ ಚಾಲನ ಚರ್ಚೆಯನ್ನು ಪ್ರಾರಂಭಿಸಿದರು. ಪ್ರೊ. ಶ್ಯಾಮಸುಂದರ ಬಿದರಕುಂದಿ, ಪ್ರೊ. ಸುಂದರರಾಜ್, ಡಾ. ವಿಜಯಾ ಸುಬ್ಬರಾಜ್, ಡಾ.ಪಿ.ವಿ. ನಾರಾಯಣ, ಪ್ರೊ.ಜಿ. ಅಶ್ವತ್ಥನಾರಾಯಣ, ಶ್ರೀಮತಿ ನಳಿನಾ, ಶ್ರೀ ಗುರುಪ್ರಸಾದ್, ಭಾಗವಹಿಸಿದ್ದು, ಚರ್ಚೆಯು ಅರ್ಥಪೂರ್ಣವಾಗಿ ನಡೆಯಿತು.

## ಪರಿಚಯ:ರಂ.ಶಾ.ಲೋಕಾಪುರ(ಜನನ13–07–1932)

ಪಿ.ಜಿ. ವುಡ್ ಹೌಸ್ ಪುಸ್ತಕಗಳನ್ನೋದಿ ಪ್ರಭಾವಿತರಾದ ರಂ.ಶಾ ಅವರು ಅಂದಿನ ದಿನಗಳಲ್ಲಿ ಸುಧಾ, ಮಯೂರ ಪತ್ರಿಕೆಗಳಲ್ಲಿ ಅನೇಕ ಹಾಸ್ಯ ಲೇಖನಗಳನ್ನು ಬರೆದಿದ್ದರು. ಸುಧಾ ಯುಗಾದಿ ಕಾದಂಬರಿ ಸ್ಪರ್ಧೆಯಲ್ಲಿ ಇವರ 'ಸಾವಿತ್ರಿ' ಕಾದಂಬರಿಗೆ ಮೊದಲ ಬಹುಮಾನ ಸಂದಿತ್ತು. ಟಿ.ಎಸ್. ರಂಗಾ ಅವರು ಈ ಕಥೆಯನ್ನಾಧರಿಸಿ ಇದೇ ಹೆಸರಿನಿಂದ ಚಲನಚಿತ್ರವನ್ನು ನಿರ್ಮಿಸಿದ್ದರು.
ರಂ. ಶಾ ಅವರ ಎರಡನೆಯ ಕಾದಂಬರಿ 'ತಾಯೀ ಸಾಹೇಬ'. ಈ ಕಥೆಯನ್ನು ಇದೇ ಹೆಸರಿನಿಂದ ಗಿರೀಶ್ ಕಾಸರವಳ್ಳಿಯವರು ಚಲನಚಿತ್ರವನ್ನಾಗಿಸಿದರು. ಈ ಎರಡೂ ಚಿತ್ರಗಳು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಗೌರವ ಪಡೆದವು.
ರಂ. ಶಾ ಅವರ ಹಲವಾರು ಸಣ್ಣಕಥೆಗಳು ನಾಡಿನ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆಯಲ್ಲದೆ ಕಥಾಸಂಕಲನಗಳಾಗಿಯೂ ಪ್ರಕಟಗೊಂಡಿವೆ. ರಂ. ಶಾ ಅವರು ಕನ್ನಡ–ಮರಾಠಿ ಭಾಷೆಗಳ ತೌಲನಿಕ ಅಧ್ಯಯನ ನಡೆಸಿದ ಫಲವಾಗಿ 'ಹಳೆಗನ್ನಡ ಮತ್ತು ಮರಾಠಿ' ಎಂಬ ಸಂಶೋಧನಾ ಗ್ರಂಥವನ್ನು ಕನ್ನಡ ವಿಶ್ವವಿದ್ಯಾಲಯ ಹಂಪಿಯ ಮೂಲಕ 1994ರಲ್ಲಿ ಪ್ರಕಟಿಸಿದ್ದಾರೆ. ರಂ. ಶಾ ಅವರು ಫೆಲೋಶಿಪ್ ಪಡೆದು ನಾಥ ಸಂಪ್ರದಾಯದ ಬಗ್ಗೆ ಸಂಶೋಧನಾ ಗ್ರಂಥ ರಚನೆ ಮಾಡಿದ್ದಾರೆ. 'ಕರ್ನಾಟಕದಲ್ಲಿ ಅವೈದಿಕ ಸಾಹಿತ್ಯ ಪರಂಪರೆಗಳು' ರಂ. ಶಾ ಅವರ ಮತ್ತೊಂದು ಮಹತ್ವದ ಕೃತಿ. ರಂ.ಶಾ. ಲೋಕಾಪುರ ಅವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೇ ಅಲ್ಲದೆ, ಜೋಳದ ರಾಶಿ ದೊಡ್ಡನಗೌಡ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ಗಳಗನಾಥ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮುಂತಾದ ಅನೇಕ ಗೌರವಗಳು ಸಂದಿವೆ.

## "ಮಾಸದ ಕನ್ನಡ"

ಕನ್ನಡ ನಾಡು, ನುಡಿ, ಸಾಹಿತ್ಯಸಕ್ತರ ಈ ವೇದಿಕೆಯ ಸದಸ್ಯರು ಪ್ರತಿ ತಿಂಗಳ ಮೊದಲ ಭಾನುವಾರ ಕೂಡಿ ಒಬ್ಬ ಸಾಹಿತಿಯ ಒಂದು ಕೃತಿಯನ್ನು ಆಯ್ದು ಎಲ್ಲರಲ್ಲೂ ಹಂಚಿಕೊಳ್ಳುವ ಮತ್ತು ಅದರ ಬಗ್ಗೆ ಚರ್ಚೆ ನಡೆಸುವ ಕಾರ್ಯಕ್ರಮವನ್ನು ಆಯೋಜಿಸಿಕೊಂಡು ಬರುತ್ತಿದೆ. ಇವರ ಕಾರ್ಯಕ್ರಮಗಳು ಭುವನಗಿರಿ ಕ್ಷೇಮಾಭಿವೃದ್ಧಿ ಸಂಘದ ಆವರಣದಲ್ಲಿ ನಡೆಯುತ್ತಿದೆ. ಆಸಕ್ತರು ಶ್ರೀರಾಮಚಂದ್ರ ಶಾಸ್ತ್ರಿ 9482518155 ಅವರನ್ನು ಸಂಪರ್ಕಿಸಬಹುದು.
ಮಾರ್ಚ್ 2016ರಲ್ಲಿ ವೇದಿಕೆಯು ಕನ್ನಡ ಕಣ್ವ ಆಚಾರ್ಯ ಬಿ.ಎಂ.ಶ್ರೀ.ಅದರ ಕೃತಿಗಳ ಮತ್ತುಅವರ ಸಾಧನೆಯ ಬಗ್ಗೆ ಒಂದು ವಿಶೇಷ ಕಾರ್ಯಕ್ರಮವನ್ನು ಆಯೋಜಿಸಿದ್ದು ಸದಸ್ಯರೆಲ್ಲ ಉತ್ಸಾಹದಿಂದ ಭಾಗವಹಿಸಿದ್ದರು.

## ರಂಗ ಸಂವಾದ – ಹೊಸ ಕಾರ್ಯಕ್ರಮ ಸರಣಿ

ಬಿ. ಎಂ.ಶ್ರೀ. ಪ್ರತಿಷ್ಠಾನವು ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ಪ್ರತಿ ತಿಂಗಳ ನಾಲ್ಕನೇ ಶನಿವಾರದಂದು ಸಾಮಾಜಿಕ ಎಚ್ಚರ ಮತ್ತು ಕಳಕಳಿ ಮೂಡಿಸುವ ಕಿರುನಾಟಕ ಪ್ರದರ್ಶನ ಸರಣಿ ಕಾರ್ಯಕ್ರಮವನ್ನು ಹಮ್ಮಿಕೊಂಡಿರುತ್ತದೆ. ಪ್ರಥಮರಂಗ ಸಂವಾದದಲ್ಲಿ ಪರಿಸರ ಪ್ರಿಯ ಗಣೇಶನ ಕುರಿತಾದ "ಮಾತಾಡ್ತಾನೆ ನೋಡಿ ನಮ್ಮ ಗಣೇಶ" ನಾಟಕವನ್ನು 27ನೇ ಆಗಸ್ಟ್ 2016 ರಂದುಸಂಜೆ 6 ಗಂಟೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಪ್ರದರ್ಶಿಸಲಾಗುತ್ತದೆ.
ಗ್ರೀನ್ ಸ್ಟೇಜ್ ಸಂಸ್ಥೆಯುರಂಗ ಭೂಮಿಯ ವಿವಿಧ ಚಟುವಟಿಕೆಗಳ ಮೂಲಕ ಸಾಮಾಜಿಕ ಜಾಗೃತಿ ಮೂಡಿಸುವ ರಂಗ ತಂಡವಾಗಿರುತ್ತದೆ.

# ಅಭಿನಂದನೆಗಳು

## 36ನೇ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಹೊಂಗನಸು ಅಭಿನಂದಿಸುತ್ತದೆ.

### ನೂತನವಾಗಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರ ವಿವರಗಳು



**ಶ್ರೀ ಬಿ.ಆರ್. ರವೀಂದ್ರನಾಥ್,** ವಿತ್ತೀಯ ಸಲಹೆಗಾರ, ಅನುವಾದಕ, ಲೇಖಕ, ನಿರ್ದೇಶಕ, ಇನ್ಸ್ಟಿಟ್ಯೂಟ್ ಆಫ್ ಟ್ರಾನ್ಸ್ಲೇಷನ್ ಸ್ಟಡೀಸ್ ಬೆಂಗಳೂರು,
ಹಲವಾರು ಸಮಿತಿಗಳು, ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಹಾಗೂ ಈಗ ಸದಸ್ಯ/ಪದಾಧಿಕಾರಿ ಇವರು 2013ರಿಂದ 2016ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಇವರು ಫೆಬ್ರವರಿ 2014ರಿಂದ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.



**ಡಾ|| ಎಸ್. ಅನಿಲ್ ಕುಮಾರ್** ಅವರು ವಾಣಿಜ್ಯ ಉಪನ್ಯಾಸಕರಾಗಿ ಕಳೆದ 16ವರ್ಷಗಳಿಂದ ವಿಜಯ ಕಾಲೇಜಿನಲ್ಲಿ ಸೇವೆ ಸಲ್ಲಿಸುತ್ತಿದ್ದರು. ಪ್ರಸ್ತುತ ಸಿಂಧಿ ವಾಣಿಜ್ಯ ಕಾಲೇಜಿನಲ್ಲಿ ಉಪ-ಪ್ರಾಂಶುಪಾಲರು. ಉದಯಭಾನು ಕಲಾ ಸಂಘದ ಕಾರ್ಯಕಾರಿ ಸಮಿತಿ ಸದಸ್ಯರಾಗಿ, ಸಂಸ್ಥೆಯ ಉಚಿತ ಉಪನ್ಯಾಸ ತರಗತಿಯಲ್ಲಿ ಬಡ ವಿದ್ಯಾರ್ಥಿಗಳಿಗೆ ವಾಣಿಜ್ಯ ವಿಷಯದಲ್ಲಿ ಬೋಧಿಸುವುದರೊಂದಿಗೆ ಅನೇಕ ಸಾಮಾಜಿಕ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರು 2013ರಿಂದ 2016ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಪ್ರಸಕ್ತ ಪ್ರತಿಷ್ಠಾನದ ಆಂತರಿಕ ಲೆಕ್ಕ ಪರಿಶೋಧಕರಾಗಿ ಲೆಕ್ಕಪತ್ರ ವ್ಯವಸ್ಥೆಗಳನ್ನು ಗಣಕೀಕರಣಗೊಳಿಸುವುದು ಹಾಗೂ ವಾರ್ಷಿಕ ಲೆಕ್ಕ ತಪಾಸಣೆ ಜವಾಬ್ದಾರಿಯನ್ನು ಹೊತ್ತು ಸಮರ್ಥವಾಗಿ ನಿರ್ವಹಿಸಿರುತ್ತಾರೆ.



**ಪ್ರೊ. ಜಿ. ಅಶ್ವತ್ಥನಾರಾಯಣ :** ಸರ್ಕಾರಿಡಿಗ್ರಿ ಕಾಲೇಜುಗಳಲ್ಲಿ 30 ವರ್ಷ ಸೇವೆ ಸಲ್ಲಿಸಿ ಪ್ರಾಧ್ಯಾಪಕರಾಗಿ ನಿವೃತ್ತರು. ಹಂಪಿ ವಿಶ್ವವಿದ್ಯಾಲಯದ ಎಂಫಿಲ್ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರು. ಕೆಎಎಸ್, ಐಎಎಸ್ ವಿದ್ಯಾರ್ಥಿಗಳಿಗೆ ತರಬೇತಿ, ಸರ್ಕಾರಿ ಅಧಿಕಾರಿಗಳಿಗೆ ಆಡಳಿತ ಕನ್ನಡ ಶಿಬಿರಗಳನ್ನು ನಡೆಸಿದ್ದಾರೆ. ಅಮೇರಿಕಾದಲ್ಲಿ ಮಕ್ಕಳಿಗೆ ಕನ್ನಡ ಹೇಳಿಕೊಟ್ಟಿದ್ದಾರೆ. ಇವರುಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ 1996ರಿಂದ 2013ರ ವರೆಗೆ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು.



**ಡಾ.ಜಯಮ್ಮ ಕರಿಯಣ್ಣ :** ಲೋಕೋಪಯೋಗಿ ಇಲಾಖೆಯಲ್ಲಿ ಕಾರ್ಯ ವ್ಯವಸ್ಥಾಪಕರಾಗಿ ನಿವೃತ್ತಿ. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಕಾರ್ಯದರ್ಶಿ ಹಾಗೂ ಮಾಜಿ ಸಂಶೋಧನೆ ನಿರ್ದೇಶಕರು ಹಲವಾರು ಸಂಸ್ಥೆಗಳಲ್ಲಿ ಸ್ವಯಂಪ್ರೇರಿತ ಸೇವೆ. ಹಲವಾರು ಪ್ರಶಸ್ತಿಗಳು ಬಂದಿವೆ.



**ಶ್ರೀ ಸಿ.ಕೆ ರಾಮೇಗೌಡ :** ಕನ್ನಡ ಪರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು, ಹಲವಾರು ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಹಾಗೂ ಈಗ ಪದಾಧಿಕಾರಿ



**ಡಾ. ನಳಿನಿ ವೆಂಕಟೇಶ್ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರಕಟಿಸಿರುವ 'ಸಮಗ್ರ ದಾಸ ಸಾಹಿತ್ಯ'ದ 21ನೇ ಸಂಪುಟದ ವೇಳೆಯಲ್ಲಿ ಸಂಪಾದಕಿ ದೂರದರ್ಶನ ಮತ್ತು ಆಕಾಶವಾಣಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುವುದು



**ಶ್ರೀಮತಿ ಲಕ್ಷ್ಮಿ ಎನ್. ಮೂರ್ತಿ :** ಭರತನಾಟ್ಯ, ಶಾಸ್ತ್ರೀಯ ಸಂಗೀತ, ವಿದ್ವತ್ ಅಂತರಾಷ್ಟ್ರೀಯ ಸಾಂಸ್ಕೃತಿಕ ನಿರ್ದೇಶಕರು

### 36ನೇ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ನಿವೃತ್ತರಾದ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಧನ್ಯವಾದಗಳು

## ನಿವೃತ್ತ ಸದಸ್ಯರ ವಿವರಗಳು



**ಶ್ರೀ ಎಂ.ಎಸ್. ರಾಮಪ್ರಸಾದ್,** ಪ್ರತಿಷ್ಠಾನದ ಕೋಶಾಧಿಕಾರಿ ಮಾಜಿ ಕಾರ್ಯನಿರ್ವಾಹಕ ಕಾರ್ಯದರ್ಶಿಗಳು ಕರ್ನಾಟಕ ವಿಜ್ಞಾನ & ತಂತ್ರಜ್ಞಾನ ಮಂಡಳಿ. ಬೆಂಗಳೂರು, ನಿವೃತ್ತ ಇಂಜಿನಿಯರ್ ಇವರು 2010ರಿಂದ 2016ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಈ ಅವಧಿಯಲ್ಲಿ ಇವರು ಪ್ರತಿಷ್ಠಾನದ ಆಂತರಿಕ ದುರ್ಬಲತೆಗಳನ್ನು ಗುರುತಿಸಿ ಮತ್ತು ಸರಿಪಡಿಸಿ ಪ್ರತಿಷ್ಠಾನದ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿರುತ್ತಾರೆ.



**ಶ್ರೀ.ಡಿ.ನಂ. ವೆಂಕಟರಮಣಯ್ಯ**
ನಿವೃತ್ತ ಬ್ಯಾಂಕ್ ಅಧಿಕಾರಿ, ಹಲವಾರು ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಹಾಗೂ ಈಗ ಪದಾಧಿಕಾರಿಯಾಗಿ ಸೇವೆ ಸಲ್ಲಿಸಿರುತ್ತಾರೆ. ಇವರು 2010ರಿಂದ 2016ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಈ ಅವಧಿಯಲ್ಲಿ ಕೆಲ ಕಾಲ ಇವರು ಪ್ರತಿಷ್ಠಾನದ ಆಂತರಿಕ ಲೆಕ್ಕ ಪರಿಶೋಧಕರಾಗಿ ಲೆಕ್ಕಪತ್ರ ವ್ಯವಸ್ಥೆಗಳನ್ನು ಸದೃಢಗೊಳಿಸಿದ್ದಲ್ಲದೇ ಪ್ರತಿಷ್ಠಾನದ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿರುತ್ತಾರೆ.



**ಪ್ರೊ. ಹೆಚ್. ಶೇಷಗಿರಿರಾವ್,** ಸಂಯೋಜನಾಧಿಕಾರಿ, ಹಸ್ತಪ್ರತಿ ವಿಭಾಗ, ನಿವೃತ್ತ ಪ್ರಾಧ್ಯಾಪಕರು. ಇವರು 2013ರಿಂದ 2016ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಇವರು 2008ರಿಂದಲೂ ಹಸ್ತಪ್ರತಿ ವಿಭಾಗದ ಸಂಯೋಜನಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದು ಈ ವಿಭಾಗವನ್ನು ಸದೃಢಗೊಳಿಸಿ ಬಹಳಷ್ಟು ಪ್ರಗತಿಯನ್ನು ಸಾಧಿಸಿರುತ್ತಾರೆ.



**ಡಾ.ಆರ್. ಲಕ್ಷ್ಮಿನಾರಾಯಣ**
ಕಾಲೇಜು ಶಿಕ್ಷಣ ಇಲಾಖೆಯ ನಿವೃತ್ತ ಪ್ರಾಧ್ಯಾಪಕರು ಹಾಗೂ ಜಂಟಿ ನಿರ್ದೇಶಕರು. ಇವರು 2013ರಿಂದ 2016ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಪ್ರತಿಷ್ಠಾನದ ಎಲ್ಲಾ ಶೈಕ್ಷಣಿಕ ಚಟುವಟಿಕೆಗಳಲ್ಲಿ ಸಕ್ರಿಯ ಪಾತ್ರ ವಹಿಸಿರುತ್ತಾರೆ.



**ಶ್ರೀ ರಾ.ನಂ ಚಂದ್ರಶೇಖರ್**
ನಿವೃತ್ತಎಚ್.ಎ.ಎಲ್, ನೌಕರರು, ಕನ್ನಡ ಪರ ಹೋರಾಟಗಾರರು, ಲೇಖಕರು, ಹಲವಾರು ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಹಾಗೂ ಈಗ ಪದಾಧಿಕಾರಿಯಾಗಿ ಸೇವೆ ಸಲ್ಲಿಸಿರುತ್ತಾರೆ.
ಇವರು 2013ರಿಂದ 2016ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಇವರು ಪ್ರತಿಷ್ಠಾನದ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿರುತ್ತಾರೆ.

# ಡಾ॥ ವಿಜಯಾ ಸುಬ್ಬರಾಜ್ ಅವರಿಗೆ ಸರ್ವ ಶ್ರೇಷ್ಠ ಅನುವಾದ ಪ್ರಶಸ್ತಿ




**ದಿನಾಂಕ 25–3–2016ರಂದು ಡಾ॥ ವಿಜಯಾ ಸುಬ್ಬರಾಜ್ ಅವರಿಗೆ ಕುವೆಂಪು ಭಾಷಾ ಭಾರತಿ ಪ್ರಾಧಿಕಾರವು 2015–16ನೇ ಸಾಲಿನ ಗೌರವ ಪ್ರಶಸ್ತಿ ನೀಡಿರುತ್ತದೆ.**

ಹಿರಿಯ ಸಂಸ್ಕೃತಿ ಚಿಂತಕರೂ ಎಂ.ಇ.ಎಸ್. ಮಹಾವಿದ್ಯಾಲಯದ ಸುಪ್ರಸಿದ್ಧ ನಿವೃತ್ತ ಕನ್ನಡ ಪ್ರಾಧ್ಯಾಪಕರೂ ಹಿರಿಯ ವಿದ್ವಾಂಸರೂ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಶಿಕ್ಷಣ ವಿಭಾಗದ ಸಂಯೋಜನಾಧಿಕಾರಿಗಳೂ, ಎಪ್ಪತ್ತರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದವರೂ, ಖ್ಯಾತ ಸಾಹಿತಿಗಳೂ ಕರ್ನಾಟಕ ಸಾಹಿತ್ಯ ಅಕಾಡೆಯಿಯ ಗೌರವ ಪ್ರಶಸ್ತಿ, ಅನುವಾದ ಸಾಹಿತ್ಯಕ್ಕೆ ನೀಡಿದ ಕೊಡುಗೆಗಾಗಿ ರೂ. 50,000 ಗಳನ್ನೊಳಗೊಂಡ ಕುವೆಂಪು ಭಾಷಾ ಭಾರತಿ ನೀಡಿದ ಗೌರವ ಪ್ರಶಸ್ತಿಗಳನ್ನೊಳಗೊಂಡಂತೆ ಇಪ್ಪತ್ತಕ್ಕೂ ಹೆಚ್ಚು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದವರೂ ಆದ ಸನ್ಮಾನ್ಯ ಡಾ॥ವಿಜಯಾ ಸುಬ್ಬರಾಜ್ ಅವರು ಶಿವಮೊಗ್ಗದ ಕರ್ನಾಟಕ ಸಂಘ ನೀಡುವ ಸರ್ವಶ್ರೇಷ್ಠ ಅನುವಾದ ಕೃತಿಗಾಗಿ ಡಾ.ಎಸ್.ವಿ.ಪರಮೇಶ್ವರ ಭಟ್ಟರ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಪ್ರಶಸ್ತಿಯ ಮೊತ್ತ ರೂ. 10,000. ಡಾ. ವಿಜಯಾಸುಬ್ಬರಾಜ್ ಅವರಿಗೆ 'ಹೊಂಗನಸು' ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

ಕಬ್ಬ: ಈ ಶಬ್ದವು ಸಂಸ್ಕೃತದ ಕಾವ್ಯ ಎಂಬುದರ ತದ್ಭವ (ಕಾವ್ಯ ಎಂಬುದೇ ಕವಿ ಎಂಬುದರಿಂದ ಬಂದು, ಕವಿಯ ಕೃತಿ ಎಂಬ ಅರ್ಥವನ್ನು ಹೊಂದಿದೆ; ಪ್ರಾಕೃತದಲ್ಲಿದು ಕವ್ವ ಎಂಬ ರೂಪವನ್ನು ಪಡೆಯುತ್ತದೆ). ಈಗ ಕವಿ ಎಂಬ ಶಬ್ದವೇ ಹೆಚ್ಚು ಬಳಕೆಯಲ್ಲಿದ್ದರೂ ಹಿಂದೆ ಕಬ್ಬ ಎಂಬ ಶಬ್ದವೂ ವ್ಯಾಪಕವಾಗಿ ಬಳಕೆಯಲ್ಲಿತ್ತು. ಈ ಶಬ್ದವು ಕನ್ನಡದ ಅತ್ಯಂತ ಪ್ರಾಚೀನ ಉಪಲಬ್ಧ ಕೃತಿಯಾದ 'ಕವಿರಾಜಮಾರ್ಗ'ದಲ್ಲಿಯೇ ಬಂದಿದೆ: "ಮಿಗೆ ಕನ್ನಡಗಬ್ಬಂಗಳೊಳ್ ಅಗಣಿತಗುಣ ಗದ್ಯಪದ್ಯ ಸಮ್ಮಿಶ್ರಿತಮಂ ನಿಗದಿಸುವರ್ ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್" ಎಂಬುದು ಅಲ್ಲಿಯ ಪ್ರಯೋಗ. ಅಲ್ಲದೆ 'ಬೆದಂಡೆಗಬ್ಬ' ಎಂಬ ವಿಶಿಷ್ಟ ಪ್ರಭೇದವನ್ನೂ ಅಲ್ಲಿ ಹೇಳಿದೆ; ಇದು ಕನ್ನಡದ ಸ್ವಂತ ಕಾವ್ಯ ಪ್ರಕಾರ, ಇನ್ನೊಂದು ಚತ್ತಾಣ. ಕಬ್ಬವನ್ನು ರಚಿಸುವವನು ಅಥವಾ ಕವಿಯೇ ಕಬ್ಬಿಗ. "ಸೊಗಯಿಸುವ ಕಬ್ಬಮಂ ಕಬ್ಬಿಗರಲ್ಲದೆ ಮೆಚ್ಚರ್" ಎಂಬುದು ಆಂಡಯ್ಯನ 'ಕಬ್ಬಿಗರ ಕಾವ'ದ ಮಾತು. ಕವಿಸಮುದಾಯವನ್ನು ಪೊನ್ನನ 'ಶಾಂತಿಪುರಾಣ'ದಲ್ಲಿ 'ಕಬ್ಬಿಗವಂದಿ'(ಕಬ್ಬಿಗ+ಮಂದಿ) ಎಂದು ಕರೆದಿದೆ. ಅಲ್ಲಿಯೇ ಬೇರೆಯವರ ಕೃತಿಯಿಂದ ಹಾರಿಸಿಕೊಂಡು ಬರೆಯುವವನನ್ನು 'ಕಬ್ಬಿಗಗಳ್ಳ' ಎಂದು ಕರೆದಿದೆ.

ಹಳಗನ್ನಡದಲ್ಲಿ ಸಂಸ್ಕೃತ ಮಾದರಿಯ ಕಾವ್ಯಪರಂಪರೆಯನ್ನು 'ಮಾರ್ಗ' ಎಂದೂ ಕನ್ನಡ ನಾಡಿನ ಸತ್ವವನ್ನೊಳಗೊಂಡುದನ್ನು 'ದೇಸಿ' ಎಂದೂ ಕರೆಯುತ್ತಿದ್ದರು. ಮಾರ್ಗವು ಕಾವ್ಯವಸ್ತುವಿಗೆ ಹೆಚ್ಚು ಪ್ರಾಧಾನ್ಯವಿತ್ತರೆ, ದೇಸಿಯು ಭಾವನೆಗೆ ಒತ್ತು ನೀಡುವಂತೆ ತೋರುತ್ತದೆ. ಇದು ಕ್ರಮವಾಗಿ ವಸ್ತುಕ ವರ್ಣಕ ಎಂಬ ಶಬ್ದಗಳಿಂದಲೂ ಸೂಚಿತವಾಗುತ್ತಿತ್ತು. ಹಾಗೆಯೇ ಇವುಗಳನ್ನು ಓದುಗಬ್ಬ ಪಾಡುಗಬ್ಬ [ಹಾಡುಗಬ್ಬ] ಎಂಬ ಶಬ್ದಗಳಿಂದಲೂ ಕರೆಯುತ್ತಿದ್ದರು. "ಕಬ್ಬಿಗರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರವೆರಡು ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇಕಬ್ಬೆ ಸರಸತಿಯೇ" ಎಂಬುದು ರತ್ನಾಕರವರ್ಣಿಯ 'ಭರತೇಶ್ವರ ವೈಭವದ ಪದ್ಯ. ಪಾಡುಗಬ್ಬವನ್ನು ಸಾಳ್ವನೆಂಬ ಕವಿಯು 'ಪಾಡುಗವಿತೆ' ಎಂಬ ಶಬ್ದದಿಂದಲೂ ಕರೆಯುತ್ತಾನೆ.

=====

ಕರ್ನಾಟಕ: ಕರ್ನಾಟಕ ಎಂಬುದು ಕನ್ನಡ ನಾಡಿನ ಹೆಸರಾಗಿ ಇಂದು ಬಳಕೆಯಲ್ಲಿದೆ. ಇದು ಮಹಾಭಾರತದಂತಹ ತುಂಬ ಪ್ರಾಚೀನವಾದ ಸಂಸ್ಕೃತ ಕಾವ್ಯಗಳಲ್ಲಿಯೇ ಉಲ್ಲೇಖಗೊಂಡಿದೆಯೆಂದು ವಿದ್ವಾಂಸರು ಹೇಳುತ್ತಾರೆ. ಕರ್ನಾಟಕ ಎಂಬುದು ಕನ್ನಡ ಎಂಬುದರ ಸಂಸ್ಕೃತೀಕರಣಗೊಂಡ ರೂಪ ಎಂದೂ ವಿದ್ವಾಂಸರು ಹೇಳುತ್ತಾರೆ. ಹಾಗಾದರೆ ಮಹಾಭಾರತದ ರಚನಾಕಾಲದಲ್ಲಿ ಕನ್ನಡ ಭಾಷೆಯಿತ್ತೆ? ಅಲ್ಲದೆ, ಮಹಾಭಾರತದ ಕಾಲವೇ ಗೊತ್ತಿಲ್ಲ. ಜೊತೆಗೆ, ಈ ಶಬ್ದವನ್ನು ಇತರ ಕನ್ನಡ ಪ್ರದೇಶಗಳ ಜೊತೆಗೆ ಹೇಳಲಾಗಿದೆಯೆಂದು ಭೀಷ್ಮಪರ್ವದ ಶ್ಲೋಕವೊಂದನ್ನು ಉದ್ಧರಿಸಲಾಗುತ್ತದೆ: "ಅಥಾಪರೇ ಜನಪದಾಃ ದಕ್ಷಿಣಾ ಭರತರ್ಷಭ। ದ್ರಾವಿಡಾಕೇರಲಾಪ್ರಾಚ್ಯಾ ಮೂಷಿಕಾ ವನವಾಸಿಕಾ॥ ಕರ್ನಾಟಕಾ ಮಹಿಷಕಾ ವಿಕಲ್ಪಾ ಮೂಷಕಾಸ್ತಥಾ। ಝಿಲ್ಲಿಕಾ ಕುಂತಲಾಶ್ಚೈವ ಸೌಹೃದಾ ನಭಕಾನನಾ॥" ಹಾಗೆಯೇ ಛಪ್ಪನ್ನ ದೇಶಗಳಲ್ಲಿ ಕರ್ನಾಟಕವನ್ನೂ ಸೇರಿಸಿ ಹೇಳುವ ರೂಢಿಯಿದೆ. ಆದರೆ ಆ ಕರ್ನಾಟಕ ಯಾವುದು? 'ಕರ್ನಾಟಕ ಸಿಂಹಾಸನಾಧೀಶ್ವರ' ಎಂದು ಹಲವಾರು ದೊರೆಗಳು ತಮ್ಮನ್ನು ಕರೆದುಕೊಳ್ಳುತ್ತಾರೆ. ಅವರ ಕರ್ನಾಟಕ ಯಾವುದು? ಕರ್ನಾಟಕ ಎಂಬುದು ಅಷ್ಟೊಂದು ಪ್ರಾಚೀನವಾದರೆ ಕನ್ನಡ ನಾಡು ನುಡಿ ನಾಡವರ ಬಗ್ಗೆ ಅಪಾರ ಪ್ರೇಮವನ್ನು ಹೊಂದಿದ 'ಕವಿರಾಜಮಾರ್ಗ'ದ ಕರ್ತೃ ಈ ಹೆಸರನ್ನು ಬಳಸದೆ ಈ ನಾಡನ್ನು ಕನ್ನಡ ಎಂದು ಕರೆಯುವುದೇಕೆ? ಪ್ರಾಯಶಃ ಕರ್ನಾಟಕ ಎಂಬ ಶಬ್ದವು ಈ ಕೃತಿಯ ಕಾಲದ ನಂತರ ಸೃಷ್ಟಿಯಾಗಿರಬೇಕು.

ಕರ್ನಾಟಕ ಎಂಬುದರ ಮೂಲರೂಪ 'ಕರ್ಣಾಟ'; ದೇಶವನ್ನು ಕರ್ಣಾಟ ಎಂದೂ ಭಾಷೆಯನ್ನು ಕರ್ಣಾಟ ಭಾಷೆಯೆಂದೂ ಸಂಸ್ಕೃತಪ್ರಿಯರು ಹೇಳುತ್ತಿದ್ದರು. ವಿಜಯನಗರದ ಅರಸನನ್ನು ಭೇಟಿಮಾಡಲು ಬಂದ ತೆಲುಗಿನ ದೊಡ್ಡ ಕವಿ ಶ್ರೀನಾಥನು ಹೇಳಿದನೆನ್ನಲಾದ ಚಾಟುಪದ್ಯವೊಂದರಲ್ಲಿ "ಎವ್ವರೇಮನುಚುನ್ರು ನಾಕೇಮಿ ಕೊರತ ನಾ ಕವಿತ್ವಂಬು ನಿಜಮು ಕರ್ಣಾಟ ಭಾಷಾ" ಎಂಬ ಸಾಲಿದೆ. ಕರ್ಣಾಟಕ ವಿಷಯ ಎಂಬುದು ಕನ್ನಡ ನಾಡನ್ನು ಸೂಚಿಸುತ್ತಿತ್ತು. ಕರ್ನಾಟಕ ಸಂಗೀತ ಎಂಬ ಮಾತಿದೆ; ಹಾಗೆಯೇ ಕರ್ಣಾಟಗೌಳ ಎಂಬ ರಾಗದ ಹೆಸರಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಮೂಲ ಹೆಸರು 'ಕರ್ಣಾಟಕ ಸಾಹಿತ್ಯ ಪರಿಷತ್ತು' ಎಂದು, ಅದನ್ನು ಕರ್ನಾಟಕ ಸಾಹಿತ್ಯ ಪರಿಷತ್ತು ಎಂದು ಬದಲಿಸಲು ಪ್ರಯತ್ನಗಳಾದವು. ಕರ್ಣಾಟಕ ಎಂಬುದು ಸಂಸ್ಕೃತ ವ್ಯಾಕರಣಕ್ಕನುಗುಣವಾದುದು, ಹಾಗಾಗಿ ಅದನ್ನೇ ಉಳಿಸಿಕೊಳ್ಳಬೇಕೆಂದು ಒಂದು ಪಕ್ಷದವರು ಪಟ್ಟುಹಿಡಿದರು. ಇಪ್ಪತ್ತನೇ ಶತಮಾನದ ಮಧ್ಯಭಾಗದಲ್ಲಿ ನಡೆದ ನ ಅಥವಾ ಣ ಯಾವುದಿರಬೇಕು ಎಂಬ ಈ ವಿವಾದವನ್ನು 'ನೊಣ ಜಗಳ' ಎಂದೇ ಕರೆಯುತ್ತಿದ್ದರು! ಜಾಣರು ಎರಡನ್ನೂ ಬಿಟ್ಟು ಕನ್ನಡ ಎಂಬುದನ್ನು ಅಳವಡಿಸಿದರು. ಕರ್ಣಾಟ ಎಂಬುದು ಕನ್ನಡವನ್ನು (ಶ್ರೀನಾಥನ ಪದ್ಯ ಅಥವಾ ಕರ್ನಾಟಕ ಸಂಗೀತದಲ್ಲಿ) ಸೂಚಿಸದೆ ಕರ್ಣ+ಅಟ ಅಂದರೆ ಕಿವಿಗೆ ಹಿತಕರವಾದ ಎಂಬ ಅರ್ಥವೇ ವಿಹಿತ ಎಂಬುದೂ ಕೆಲವರ ವಾದವಾಗಿದೆ.

**ಪರಿಚಯ**

## ಶ್ರೀಎಸ್. ವಿ. ರಾಜೇಂದ್ರ ಸಿಂಗ್ ಬಾಬು



ಸಿನಿಮಾ ಮಾಡುವಲ್ಲಿ ಸಂಪ್ರದಾಯದ ಸಂಕೋಲೆಯಿಂದ ಹೊರಬಂದು, ಹೊಸತನದ ಪ್ರಯೋಗ ಮಾಡಿ ಯಶ ಕಂಡ ನಿರ್ದೇಶಕ ರಾಜೇಂದ್ರ ಸಿಂಗ್ ಬಾಬು. ಚಿತ್ರರಂಗದ ಹಿನ್ನೆಲೆಯಿಂದ ಮೂಡಿಬಂದವರು ಅವರು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ, ನಂತರ ಸಿನಿಮಾದ ಹಾದಿ ತುಳಿದು 'ಮಹಾತ್ಮಾ ಪಿಕ್ಚರ್ಸ್' ಸಂಸ್ಥೆಯನ್ನು ಕಟ್ಟಿ ಅನೇಕ ವಿಖ್ಯಾತ ಕನ್ನಡ ಸಿನೆಮಾಗಳನ್ನು ಬೆಳ್ಳಿ ತೆರೆಗಿತ್ತ ಶ್ರೀ ಶಂಕರ ಸಿಂಗ್ ಹಾಗೂ ಖ್ಯಾತ ಅಭಿನೇತ್ರಿ ಪ್ರತಿಮಾದೇವಿ ಸಿಂಗ್ ಅವರ ಮಗನಾದ ರಾಜೇಂದ್ರ ಸಿಂಗ್ ಬಾಬು ಸಿನಿಮಾವನ್ನು ಅಕ್ಕರೆಯಿಂದ ಅಪ್ಪಿಕೊಂಡು ಬೆಳೆದವರು. ಕಲಾ ವಿಭಾಗದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪದವಿ ಪಡೆದ ನಂತರ ಆಳವಾಗಿ ಸಿನಿಮಾ ಅಧ್ಯಯನದಲ್ಲಿ ತೊಡಗಿಕೊಂಡು ಮಹಾತ್ಮ ಪಿಕ್ಚರ್ಸ್ ಸಂಸ್ಥೆಯ ಎಲ್ಲ ವಿಭಾಗಗಳಲ್ಲೂ ದುಡಿದು ಅನುಭವ ಘನೀಕರಿಸಿಕೊಂಡ ಬಾಬು ಅವರ ಪರಿಣತಿ ಅವರ ವಯೋಮಾನಕ್ಕೆ ಮೀರಿದ್ದಾಗಿತ್ತು.

1973–74 ರಲ್ಲಿ ಹಾಲಿವುಡ್ ಚಿತ್ರತಂಡ " ಮೈಟಿ ಹಿಮಾಲಯನ್ ಮ್ಯಾನ್" ಚಿತ್ರದ ಚಿತ್ರೀಕರಣಕ್ಕೆ ರಾಜ್ಯಕ್ಕೆ ಭೇಟಿಯಿತ್ತಾಗ ಆ ಯೂನಿಟ್‌ನೊಡನೆ ಕೆಲಸ ಮಾಡಿದ ಬಾಬು ತಮ್ಮ ಜ್ಞಾನದಿಂದ, ಆಧುನಿಕ ಸಿನಿಮಾ ತಂತ್ರಜ್ಞಾನದ ಕುರಿತು ತಮಗಿದ್ದ ತಿಳುವಳಿಕೆಯಿಂದ ಹಾಲಿವುಡ್ ತಂತ್ರಜ್ಞರ ಹುಬ್ಬೇರುವಂತೆ ಮಾಡಿದ್ದು ಈಗ ಇತಿಹಾಸ. 'ನಾಗರಹೊಳೆ' ಸಿನಿಮಾದೊಂದಿಗೆ ಚಿತ್ರನಿರ್ದೇಶಕನಾಗಿ ಸಿನಿಲೋಕ ಪ್ರವೇಶಿಸಿದ ಬಾಬು ತಮ್ಮ ಮೊದಲ ಪ್ರಯತ್ನದಲ್ಲೇ ಅದ್ಭುತ ಯಶಕಂಡು ಸಿನಿಲೋಕದಲ್ಲಿ ಸಂಚಲನ ಮೂಡಿಸಿದರು.

ಆಹ್ವಾನದ ಮೇರೆಗೆ ರಷ್ಯಾ, ಅಮೇರಿಕಾ, ಫ್ರಾನ್ಸ್, ಆಸ್ಟ್ರೇಲಿಯಾ, ಸಿಂಗಾಪುರ, ಫಿಜಿ ದ್ವೀಪಗಳಿಗೆ ಭೇಟಿಯಿತ್ತು ಅಲ್ಲಿ ತಮ್ಮ ಸಿನಿಮಾ ಜ್ಞಾನ ಪ್ರದರ್ಶಿಸಿದ ರಾಜೇಂದ್ರ ಸಿಂಗ್ ಬಾಬು ಎಲ್ಲೆಡೆ ತಂತ್ರಜ್ಞರಿಂದ ಪ್ರಶಂಸೆಗೊಳಗಾದವರು. ಮೈಸೂರು ವಿಶ್ವವಿದ್ಯಾನಿಲಯವು ಸಿನಿಮಾ ಅಧ್ಯಯನ ಕೋರ್ಸ್‌ಗಳನ್ನು ಆರಂಭಿಸಲು ನೇಮಿಸಿದ ಸಮಿತಿಯ ಅಧ್ಯಕ್ಷರಾದದ್ದು ರಾಜೇಂದ್ರ ಸಿಂಗ್ ಬಾಬು ಅವರ ಹೆಗ್ಗಳಿಕೆ.

ಎನ್‌ಎಫ್‌ಡಿಸಿ ಬೆಂಗಳೂರು ಪ್ರಾಂತ್ಯದ ಸ್ಕ್ರಿಪ್ಟ್ ಪ್ಯಾನೆಲ್ ಸದಸ್ಯತ್ವ, ಬೆಂಗಳೂರಿನಲ್ಲಿ 1992 ರಲ್ಲಿ ನಡೆದ ಅಂತರರಾಷ್ಟ್ರೀಯ ಚಲನ ಚಿತ್ರೋತ್ಸವಕ್ಕೆ ಸರ್ಕಾರದಿಂದ ಪಡೆದ ಸದಸ್ಯತ್ವ, ಸರ್ಕಾರಿ ಸ್ವಾಮ್ಯದ ಕಂಠೀರವ ಸ್ಟುಡಿಯೋಸ್ ನಿರ್ದೇಶಕತ್ವ, ಕನ್ನಡ ಚಲನಚಿತ್ರ ಪ್ರಶಸ್ತಿ ಆಯ್ಕೆ ಸಮಿತಿಯ ಸದಸ್ಯತ್ವ, ಬೆಂಗಳೂರು ವಿಶ್ವವಿದ್ಯಾನಿಲಯದ ಚಿತ್ರ ಅಧ್ಯಯನ ಸಮಿತಿಯ ಸದಸ್ಯತ್ವ ಮೊದಲಾದವು ಅವರನ್ನರಸಿ ಬಂದ ಗೌರವಗಳು. ಅವರು ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘದ ಅಧ್ಯಕ್ಷರಾಗಿ ಸತತ ನಾಲ್ಕನೇ ಅವಧಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇತ್ತೀಚೆಗೆ ಕರ್ನಾಟಕ ಸರ್ಕಾರವು ಅಂತರರಾಷ್ಟ್ರೀಯ ಚಲನ ಚಿತ್ರೋತ್ಸವ ಸಂಘಟನೆಯ ಕುರಿತು ಅಧ್ಯಯನ ಮಾಡಲು ಫ್ರಾನ್ಸ್‌ನ 'ಕಾನ್ಸ್'ಗೆ ಕಳುಹಿಸಿದ ನಿಯೋಗದ ಸದಸ್ಯರಾಗಿದ್ದರು. ನಾಗರಹೊಳೆ, ಅಂತ, ಸಿಂಹದ ಮರಿ ಸೈನ್ಯ, ಬಂಧನ, ಮುತ್ತಿನ ಹಾರ, ಹೂವು ಹಣ್ಣು, ಮಹಾಕ್ಷತ್ರಿಯ, ಮುಂಗಾರಿನ ಮಿಂಚು, ದೋಣಿ ಸಾಗಲಿ, ಮೊದಲಾದ ಚಿತ್ರಗಳನ್ನು ನಿರ್ದೇಶಿಸಿರುವ ಶ್ರೀ ರಾಜೇಂದ್ರ ಸಿಂಗ್ ಬಾಬು ರಾಜ್ಯ, ರಾಷ್ಟ್ರ ಪ್ರಶಸ್ತಿಗಳನ್ನು ಪಡೆದಿದ್ದಾರೆ.

ರಾಜ್ಯದಲ್ಲಿ ಚಿತ್ರನಗರಿಯನ್ನು ನಿರ್ಮಿಸಲು ಒಂದು ನೀಲನಕ್ಷೆ ಸಿದ್ಧಪಡಿಸಿ ಕೊಡುವಂತೆ ಕರ್ನಾಟಕ ಸರ್ಕಾರವು ರಾಜೇಂದ್ರ ಸಿಂಗ್ ಬಾಬು ಅವರನ್ನು ಕೋರಿತ್ತು. ಶ್ರೀ ಬಾಬು ಅವರು ಸಿದ್ಧಪಡಿಸಿಕೊಟ್ಟ ನೀಲನಕ್ಷೆಯ ಆಧಾರದ ಮೇಲೆ ಈಗ ಚಿತ್ರನಗರಿಯ ನಿರ್ಮಾಣದ ಪ್ರಕ್ರಿಯೆಗೆ ಚಾಲನೆ ಸಿಕ್ಕಿದೆ.

ಪ್ರಸ್ತುತ ರಾಜೇಂದ್ರಸಿಂಗ್ ಬಾಬು ಕರ್ನಾಟಕ ಚಲನಚಿತ್ರ ಅಕಾಡೆಮಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

## ಹೂವು ಹಣ್ಣು(1992)

ಕಥೆ

ಮಧ್ಯಮ ವರ್ಗದ ಕುಟುಂಬದಿಂದ ಬಂದ ರಮಾ ಗಂಡ ಸತ್ತ ನಂತರ ಒಂಟಿಯಾದಳು. ಎಳೆಯ ಮಗುವನ್ನು ಸಾಕಲು ಅನೇಕ ಕಷ್ಟಗಳನ್ನು ಪಟ್ಟಳು. ಕೊನೆಗೆ ಬೇರೆ ದಾರಿ ಕಾಣದೆ ವೇಶ್ಯಾವೃತ್ತಿಗೆ ಇಳಿದಳು. ಮಗಳಿಗೆ ಈ ಕಳಂಕ ಬರಬಾರದು ಎಂದು ಕಾನ್ವೆಂಟ್‌ನಲ್ಲಿ ಬಿಟ್ಟು ಓದಿಸಿದಳು. ಮಗಳು ತಾಯಿಯ ಪರಿಚಯವೇ ಇಲ್ಲದೆ ಬೆಳೆದಳು. ಆಕಸ್ಮಿಕವಾಗಿ ಈ ವಿಷಯವನ್ನು ಅರಿತ ಪೋಲೀಸ್ ಅಧಿಕಾರಿ ಮಗಳ ಮೇಲೆ ಕಣ್ಣು ಹಾಕಿದ ರಮಾ ಅವನ ರುಂಡನ್ನು ಚಂಡಾಡಿದ ನಂತರ ಸೆರೆವಾಸ ಅನುಭವಿಸಿದಳು. ಬಿಡುಗಡೆಯಾಗಿ ಬಂದಾಗ ಮಗಳು ಮದುವೆಯಾಗಿ ಹೆಣ್ಣು ಮಗುವಿನ ತಾಯಿಯೂ ಆಗಿದ್ದಳು. ಗೊತ್ತಿಲ್ಲದೆ ಮಗಳ ಮನೆಯ ಬಳಿಯೇ ರಮಾ ಮನೆ ಮಾಡಿದಳು. ಅಜ್ಜಿ ಮೊಮ್ಮಗಳ ನಡುವೆ ಆತ್ಮೀಯತೆ ಬೆಳೆಯಿತು. ಮಗಳು ವಿಷಯ ತಿಳಿಯದೆ ಅಡ್ಡಿ ಮಾಡಿದಳು. ನಂತರ..........

ವೇಶ್ಯೆಯ ಬದುಕನ್ನು ಮಾನವೀಯ ದೃಷ್ಟಿಯಿಂದ ನೋಡುವ ಪ್ರಯತ್ನವನ್ನು ಚಿತ್ರ ಮಾಡಿದೆ.

ವಿಶೇಷ: ಖ್ಯಾತ ಛಾಯಾಗ್ರಾಹಕ ವಿ.ಕೆ.ಮೂರ್ತಿ ಛಾಯಾಗ್ರಹಣ ನೀಡಿರುವ ಏಕೈಕ ಕನ್ನಡ ಚಿತ್ರ.

ಉದ್ದ: 4403.00 14 ರೀಲುಗಳು, ಯು ಸರ್ಟಿಫಿಕೇಟ್

ಪುರಸ್ಕಾರಗಳು: 1993–94ರ ಸಾಲಿನ ಅತ್ಯುತ್ತಮ ಚಿತ್ರ ಪ್ರಶಸ್ತಿ, ಅತ್ಯುತ್ತಮ ನಟಿ ಲಕ್ಷ್ಮಿ

---

### ಆಧುನಿಕ ಕನ್ನಡ ತೆಲುಗು ಸಾಹಿತ್ಯ – ಪರಸ್ಪರ ಅನುವಾದಗಳು

ದಿನಾಂಕ 18–07–2016ರಂದು ಪ್ರಸಿದ್ಧ ತೆಲುಗು–ಕನ್ನಡ ಅನುವಾದಕರಾದ ಶ್ರೀ ಮಾರ್ಕಾಂಡಪುರಂ ಶ್ರೀನಿವಾಸ ನಿವೃತ್ತ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ ಅವರು "ಆಧುನಿಕ ಕನ್ನಡ ತೆಲುಗು ಸಾಹಿತ್ಯ – ಪರಸ್ಪರ ಅನುವಾದಗಳು" ವಿಷಯದ ಬಗ್ಗೆ ರಾಸ ಸಾಹಿತ್ಯ, ತೀನಂಶ್ರೀ, ಟಿ ಎಸ್ ವೆಂಕಣ್ಣಯ್ಯ, ಡಿ. ಲಿಂಗಯ್ಯ, ಶಾರದಾ ಹನುಮಯ್ಯ ದತ್ತಿ ಉಪನ್ಯಾಸವನ್ನು ನೀಡಿದರು. ಶ್ರೀ ಮಾರ್ಕಾಂಡಪುರಂ ಶ್ರೀನಿವಾಸ ಅವರು ಬಹಳಷ್ಟು ಮಾಹಿತಿಗಳನ್ನು ಸಂಗ್ರಹಿಸಿ ನೀಡಿದ ಈ ವಿದ್ವತ್ ಪೂರ್ಣ ಉಪನ್ಯಾಸದಲ್ಲಿ ಸರ್ವಜ್ಞ ಹಾಗೂ ವೇಮನರ ಕಾಲದಿಂದ ಕನ್ನಡ ತೆಲುಗು ನಡುವಿನ ಕೊಡು ಕೊಳ್ಳುವಿಕೆಗಳ ಸಮಗ್ರ ಅವಲೋಕನ ಮಾಡಿದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ. ಪಿ.ವಿ. ನಾರಾಯಣ ಅವರು ಎಲ್ಲರನ್ನು ಸ್ವಾಗತಿಸಿ ಉಪನ್ಯಾಸಕಾರರ ಪರಿಚಯ ಮಾಡಿಕೊಟ್ಟರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಗೌರವ ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ಅವರು ವಂದನಾರ್ಪಣೆ ಮಾಡಿದರು.



**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of Posting : 30-07-2016**

## ಸದಸ್ಯರ ಪ್ರತಿಕ್ರಿಯೆ

ಮಾನ್ಯರೆ,

ಹೊಂಗನಸು ಪತ್ರಿಕೆ ವರ್ಣರಂಜಿತವಾಗಿ ಸಕಾಲಕ್ಕೆ ಉಪಯುಕ್ತ ಮಾಹಿತಿಗಳಿಂದ ಪ್ರಕಟವಾಗುತ್ತಿರುವುದು ಶ್ಲಾಘನೀಯ ಸಂಗತಿ ಆಗಿದೆ. ಪ್ರತಿಷ್ಠಾನದ ಕಾರ್ಯಕ್ರಮಗಳನ್ನು, ವರದಿಗಳನ್ನು ಪ್ರಕಟಿಸುತ್ತಿರುವುದು ಐತಿಹಾಸಿಕವಾಗಿ ದಾಖಲಾಗಬೇಕಾದ ವಿಚಾರಗಳಾಗಿವೆ.

ಮುಖ್ಯವಾಗಿ ಪ್ರತಿ ತಿಂಗಳಲ್ಲಿ ಜನಿಸಿದ ಮರಣಿಸಿದ ಸಾಹಿತಿ ವಿದ್ವಾಂಸರ ದಿನಾಂಕಗಳನ್ನು ನೀಡುತ್ತಿರುವುದು ಉಪಯುಕ್ತ ಮಾಹಿತಿ ಆಗಿರುವುದಲ್ಲದೆ ಅವರ ಬಗ್ಗೆ ಸ್ಮರಣಾಂಜಲಿ- ಜನ್ಮದಿನ ಕಾರ್ಯಕ್ರಮಗಳನ್ನು ಪ್ರತಿಷ್ಠಾನ ಮತ್ತು ಇತರ ಸಂಘಸಂಸ್ಥೆಗಳು ವ್ಯವಸ್ಥೆ ಮಾಡಲು ಮಾರ್ಗದರ್ಶಿ ಆಗಿದೆ. ಸಾಹಿತ್ಯೋಪಾಸಕರು ಜನನ-ಮರಣ ಪಟ್ಟಿಯಲ್ಲಿ ದಿನಾಂಕಗಳನ್ನು ಕ್ರಮವಾಗಿ ಕಾಲಾನುಸಾರ ಕೊಡಿ. ಸಾಧ್ಯವಾದರೆ ಅವರ ಭಾವ ಚಿತ್ರಗಳನ್ನು ಸ್ಟಾಂಪ್ ಆಕಾರದಲ್ಲಿ ಪ್ರಕಟಿಸಿ.

ವಚನವಿಹಾರ, ಕೃತಿಚಿತ್ರ ಪ್ರದರ್ಶನ, ಗಮಕವಾಹಿನಿ ಕಾರ್ಯಕ್ರಮಗಳು ನಿಜಕ್ಕೂ ಪ್ರತಿಷ್ಠಾನದ ಹೆಮ್ಮೆಯ ಕಾರ್ಯಕ್ರಮಗಳು, ಸಾಹಿತ್ಯಪರಿಷತ್ತು ಮಾಡಬೇಕಾದ ಕೆಲಸವನ್ನು ಪ್ರತಿಷ್ಠಾನದ ಮಾಡುತ್ತಿದೆ. ಸಂತೋಷದ ಸಂಗತಿ. ವಚನವಿಹಾರ ಹಾಗೆ ದಾಸವಿಹಾರದ ಕಾರ್ಯಕ್ರಮ ಸಾಧ್ಯವಿಲ್ಲವೇ? ಪ್ರತಿಷ್ಠಾನದಲ್ಲಿ ಹಿರಿಯ ವಿದ್ಯಾರ್ಥಿವೇದಿಕೆ ರಚನೆ ಆಗಿರುವುದು ಆನಂದದ ಸಂಗತಿ. ಈ ವೇದಿಕೆಗೆ ವಿದ್ಯಾರ್ಥಿಗಳಿಗೆ ಪಾಠ ಹೇಳಿದ ಅಧ್ಯಾಪಕರನ್ನು ಗೌರವ ಸದಸ್ಯರನ್ನಾಗಿ ಮಾಡಿಕೊಂಡು ವೇದಿಕೆಯ ಎಲ್ಲ ಕಾರ್ಯಕ್ರಮಗಳಿಗೂ ಆಹ್ವಾನಿಸಿದರೆ ವೇದಿಕೆಗೆ ಮಾರ್ಗದರ್ಶನ, ಸ್ಫೂರ್ತಿಸಿಗಲು ಸಾಧ್ಯ.

ಪದಚರಿತೆ ಪಿ. ನಾರಾಯಣ ಅವರ ಲೇಖನಮಾಲೆ ಸಂಶೋಧಕರಿಗೆ ಅತ್ಯುಪಯುಕ್ತವಾಗಿದೆ. ಇಂಥ ಲೇಖನಗಳು ಇನ್ನೂ ಹೆಚ್ಚಲಿ.

ವಂದನೆಗಳು

ಪ್ರೊ॥ಜಿ. ಅಶ್ವತ್ಥನಾರಾಯಣ.

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ - ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/- ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

## 2016 ಜುಲೈ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಓಲೆಗರಿ ಮತ್ತು ತಾಳೆಗರಿಗಳ ಕಾರ್ಯ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷಣಾ ಕಾರ್ಯವು ನಡೆಯುತ್ತಿದೆ. ೨೦೧೬ರ ಜುಲೈ ತಿಂಗಳಿನಲ್ಲಿ ೪೪ ಗ್ರಂಥಗಳ ಶುಷ್ಕ ಶುದ್ಧೀಕರಣ, ೧೪ ಗ್ರಂಥಗಳಿಗೆ ತೈಲ, ೨೮ ಮಸಿ ಲೇಪನ ಕಾರ್ಯ, ೩೮ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೧೪ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೪೪ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ.

ಕಾಗದದ ಹಸ್ತಪ್ರತಿಗಳು/ಪುಸ್ತಕಗಳು/ಚಿತ್ರಗಳು

೨೫ ಪುಟಗಳ ಸ್ವಚ್ಛತಾಕಾರ್ಯ ಮತ್ತು ೨೫ ಡಿಜಿಟಲೈಜೇಷನ್ ಕಾರ್ಯವನ್ನು ಮುಗಿಸಿದೆ.

ಶ್ರದ್ಧಾಂಜಲಿ

## ಸಿ.ಎನ್. ರಾಮಚಂದ್ರ



ಚೆನ್ನೈ ದೂರದರ್ಶನದ ನಿರ್ದೇಶಕ ಶ್ರೀ ಸಿ.ಎನ್. ರಾಮಚಂದ್ರ ಅವರು 11ನೇ ಜುಲೈ 2016 ರಂದು ಹಠಾತ್ ನಿಧನರಾದರು. ಸುಳ್ಯದಲ್ಲಿ ಜನಿಸಿದ ರಾಮಚಂದ್ರ UPSCಯಲ್ಲಿ ಆಯ್ಕೆಯಾಗಿ ಆಕಾಶವಾಣಿಗೆ ಕಾರ್ಯಕ್ರಮ ನಿರ್ವಾಹಕರಾಗಿ 80ರ ದಶಕದಲ್ಲಿ ಸೇರಿದವರು. ಭದ್ರಾವತಿ, ಚಿತ್ರದುರ್ಗ, ಬೆಂಗಳೂರು ಆಕಾಶವಾಣಿಯಲ್ಲಿ "ಏಸೂರ ಕೊಟ್ಟರೂ, ಈಸೂರ ಕೊಡೆವು" ಎಂಬ ಸ್ವಾತಂತ್ರ್ಯ ಚಳುವಳಿಯ ಕುರಿತು ರಾಮಚಂದ್ರ ಅವರು ನಿರ್ದೇಶಿಸಿದ್ದ ನುಡಿರೂಪಕಕ್ಕೆ ರಾಷ್ಟ್ರಪ್ರಶಸ್ತಿ ದೊರಕಿತ್ತು. ಬೆಂಗಳೂರು ದೂರದರ್ಶನದ ಉಪ ನಿರ್ದೇಶಕರಾಗಿ ಅಪಾರ ಜನಾನುರಾಗವನ್ನು ಸಂಪಾದಿಸಿದ ಸಿ.ಎನ್.ಆರ್, ಎರಡು ವರ್ಷಗಳ ಹಿಂದೆಯಷ್ಟೇ ಬಡ್ತಿ ಪಡೆದು ಚೆನ್ನೈ ದೂರದರ್ಶನದ ನಿರ್ದೇಶಕರಾಗಿ ಹೋಗಿದ್ದರು, "ಹಕ್ಕಿ ಚೆಲ್ಲಿದ ಬೀಜ" ಕಥಾಸಂಕಲನವೇ ಅವರ ಕೊನೆಯ ಕೃತಿ. ಅದಕ್ಕೆ ಕಾಂತಾವರ ಕನ್ನಡ ಸಂಘದ ಪ್ರಶಸ್ತಿ ಲಭಿಸಿತ್ತು. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಬಗ್ಗೆ ಅಪಾರ ಅಭಿಮಾನ ಹೊಂದಿದ್ದ ಸಿ.ಎನ್.ರಾಮಚಂದ್ರ ಅವರು ಡಾ. ವಿಜಯಾ ಸುಬ್ಬರಾಜ್ ಅವರು ಸ್ಥಾಪಿಸಿರುವ "ಗಣ್ಯ ಲೇಖಕಿ" ಪ್ರಥಮ ಪುರಸ್ಕಾರವನ್ನು ದಿನಾಂಕ 26-04-2015ರಂದು ಪ್ರದಾನ ಮಾಡಿದ್ದರು. ಸಿ.ಎನ್. ರಾಮಚಂದ್ರ ಅವರಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ........................................................................................

..........................................................................................................

..........................................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭